CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೩, ೨೦೦೩ (ಕಾರ್ತಿಕ ೧, ಶಕ ವರ್ಷ ೧೯೨೫) | ಸಂಚಿಕೆ ೪೨ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 152 ಎಂಸಿಎಲ್ 2002, ಬೆಂಗಳೂರು, ದಿನಾಂಕ:17ನೇ ಸೆಪ್ಟೆಂಬರ್, 2003**

1977ರ ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನ್) ನಿಯಮಾವಳಿ 5(1)(ಎ) ನಿಯಮದಡಿ ಬೆಂಗಳೂರು ವೈದ್ಯಕೀಯ ಕಾಲೇಜಿನ ಈ ಕೆಳಕಂಡ ಮೂತ್ರ ರೋಗ ಶಾಸ್ತ್ರ ಉಪನ್ಯಾಸಕರ ಪ್ರೊಬೆಷನ್ ಅವಧಿಯನ್ನು ಅವರ ಹೆಸರಿನ ಮುಂದೆ ಸೂಚಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ತೃಪ್ತಿಕರವಾಗಿ ಪೂರೈಸಿದ್ದಾರೆ ಎಂದು ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ವೈದ್ಯರ ಹೆಸರು | ಸೇವೆಗೆ ಸೇರಿದ ದಿನಾಂಕ | ಪ್ರೊಬೆಷನ್ ಅವಧಿ ಪೂರೈಸಿದ ದಿನಾಂಕ |
|---|---|---|---|
| 1. | ಡಾ: ಆರ್. ಕೇಶವ ಮೂರ್ತಿ | 31.08.2000 | 31.08.2002 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1175 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**HIGH COURT OF KARNATAKA, BANGALORE**

**Sub:** In the matter of determination of date of birth enquiry of Sri Siddalinga Prabhu, Civil Judge (Jr.Dn.) & JMFC., Mudigere, now working as Civil Judge (Jr.Dn.) & JMFC at Shikaripura.

**Read:**

Application dated: 29.7.2002 submitted by Sri Siddalinga Prabhu, Civil Judge (Jr.Dn.) & JMFC., Mudigere, now working as Civil Judge (Jr.Dn.) & JMFC at Shikaripura under Section 5(2) of the Karnataka State Government Servants (Determination of Age) Act, 1974 requesting for alteration of his date of birth from 29.12.1965 to 29.12.1966.

**Preamble:**

The Registrar (Vigilance), Specially Empowered Authority, High Court of Karnataka, Bangalore who has been appointed as the Enquiry Officer under Section 5(3) of the said Act, has considered the application filed by the applicant, held on enquiry under the said Act and after considering the evidence produced by the Officer Sri Siddalinga Prabhu, Civil Judge (Jr.Dn.) & JMFC., Mudigere now working as Civil Judge (Jr.Dn.) & JMFC., at Shikaripura, and the entire records, submitted his report recommending to accept the prayer of the Officer to alter his date of birth in the Service Records from 29.12.1965 to 29.12.1966.

**Order No. DDB. 3/2002, Dated: 16th September, 2003**

The High Court is pleased to accept the findings of the Enquiry Officer viz., Registrar (Vigilance), High Court of Karnataka, Bangalore and accordingly orders that the date of birth of Sri Siddalinga Prabhu, Civil Judge (Jr.Dn.) & JMFC., Mudigere now working at Shikaripur is altered from 29.12.1965 to 29.12.1966 (Twenty nineth day of December one thousand nine hundred sixty five to Twenty nineth day of December one thousand nine hundred sixty six) under Section 5(1) of the Karnataka State Government Servants (Determination of Age) Act, 1974.

BY ORDER OF THE HIGH COURT,
**A.S. PACHHAPURE,**
REGISTRAR (VIGILANCE) AND
ENQUIRING OFFICER.

PR-1176

**HIGH COURT OF KARNATAKA, BANGALORE**
**NOTIFICATION**
**No. GOB (I) 1/2003, Bangalore, Dated: 17th September, 2003**

The Presiding Officer of the Court of Addl. District and Sessions Judge, Hassan, is concurrently appointed as the Presiding Officer of the Court of District and Sessions Judge, Hassan, with immediate effect and until further orders.

BY ORDER OF THE HIGH COURT,
**N. ANANDA**
REGISTRAR GENERAL.

PR-1177

**HIGH COURT OF KARNATAKA, BANGALORE**
**NOTIFICATION**
**No. GOB (I) 585/2000, Bangalore, Dated: 9th September, 2003**

In exercise of the powers conferred by Section 407 of the Code of Criminal Procedure, 1973, the High Court hereby withdraws S.C.3/99 (which was transferred under this office Notification of even number dated: 21.6.2003) from the file of the Presiding Officer, Fast Track Court_II, Belgaum, and re-transfers the same to the file of the II Addl. District and Sessions Judge, Belgaum, for disposal in accordance with law.

BY ORDER OF THE HIGH COURT,
**N. ANANDA**
REGISTRAR GENERAL.

PR-1178

**HIGH COURT OF KARNATAKA, BANGALORE**
**NOTIFICATION**
**No. GOB (I) 28/2001, Bangalore, Dated:28th May, 2003**

In pursuance to Rule 118-A (1)(a) of K.C.S.Rs., sanction is hereby accorded for payment of cash equivalent of leave salary for Earned Leave at the credit of Sri V.P. Jahagirdar, District Judge (Retired), subject to a maximum of 240 days on the date of his retirement from Judicial Service on 31.07.2003 on attaining the age of 58 years, under Rule 95(A) of K.C.S.Rs.

BY ORDER OF THE HIGH COURT,
**A.C. KABBIN**
REGISTRAR GENERAL.

PR-1179

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಸಿಆಸುಇ 317, ಸೇಅಸೆ 2003 ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2003**

ಡಾ: ಎಸ್. ಸುಬ್ರಮಣ್ಯ, ಐ.ಎ.ಎಸ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬೆಂಗಳೂರು, ಇವರಿಗೆ ದಿನಾಂಕ: 1.10.2003 ರಿಂದ 10.10.2003 ರವರೆಗೆ (ಉದಿಸೇ) ಒಟ್ಟು 10 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಮೇಲ್ಕಂಡ ರಜೆ ಅವಧಿಯಲ್ಲಿ ಡಾ:ಎಸ್. ಸುಬ್ರಮಣ್ಯ, ಐ.ಎ.ಎಸ್, ರವರು ಈ ಕೆಳಕಂಡ ಅವರ ಕುಟುಂಬದ ಸದಸ್ಯರು ಬೆಂಗಳೂರಿನಿಂದ ರಾಜಸ್ಥಾನದ ಜೈಸಲ್ಮೀರ್‌ಗೆ ಹೋಗಿ ಬರಲು ರಜಾ ಪ್ರಯಾಣ ರಿಯಾಯಿತಿಯನ್ನು 2002-2005ನೇ ಬ್ಲಾಕ್ ಅವಧಿಯಲ್ಲಿ ಕೇಂದ್ರ ನಿಯಮದಡಿ ಮಂಜೂರಾತಿ ನೀಡಲಾಗಿದೆ. ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90 ರಷ್ಟು ಹಣವನ್ನು ಅಂತಿಮ ಪ್ರಯಾಣ ಭತ್ಯೆಯ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೊಳಪಟ್ಟು ಮುಂಗಡ ಪ್ರಯಾಣ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

| ಹೆಸರು | ಸಂಬಂಧ | ವಯಸ್ಸು |
|---|---|---|
| 1. ಡಾ: ಎಸ್. ಸುಬ್ರಮಣ್ಯ | ಸ್ವತ: | 47 ವರ್ಷಗಳು |
| 2. ಶ್ರೀಮತಿ ರಶ್ಮಿ | ಪತ್ನಿ | 39 ವರ್ಷಗಳು |
| 3. ಶ್ರೀ ಕಿರಣ್ | ಮಗ | 16 ವರ್ಷಗಳು |
| 4. ಕು: ನಿಖಿಲಾ | ಮಗಳು | 12 ವರ್ಷಗಳು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ವಿ. ಕುಮಾರಸ್ವಾಮಿ**
ಪಿ.ಆರ್. 1180 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-1).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 271 ಆಸೇಇ 2003 ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2003**

ಶ್ರೀ ಕೆ. ಎಸ್. ಉಮಾಪತಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಾಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ದಿನಾಂಕ: 24.5.2003 ರಿಂದ ದಿನಾಂಕ: 2.8.2003 ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 8(15) (ಎಫ್)ರ ಪ್ರಕಾರ ಕಡ್ಡಾಯ ನೇಮಕಾತಿ ನಿರೀಕ್ಷಣಾ ಅವಧಿಯೆಂದು ಹಾಗೂ ದಿನಾಂಕ: 3.8.2003 ರಿಂದ 6.8.2003 ರವರೆಗೆ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 76ರ ಅನ್ವಯ ವರ್ಗಾವಣೆ ಸೇರುವ ಕಾಲವೆಂದು ಪರಿಗಣಿಸಿ ಸಕ್ರಮಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು. ಪಿ. ಪ್ರಭು**
ಪಿ.ಆರ್. 1181 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 101 ಆಸೇವ 2003 ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2003**

ಕರ್ನಾಟಕ ಆಡಳಿತ ಸೇವೆಯ ಕಿರಿಯ ಶ್ರೇಣಿ ವೃಂದಕ್ಕೆ ಸೇರಿದ ಈ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ನೇಮಿಸಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ವರ್ಗಾಯಿಸಿ ನೇಮಿಸಿರುವ ಹುದ್ದೆ |
|---|---|---|
| 1. | ಎಸ್. ಎಂ. ಸೊನ್ನದ್, ಕಂದಾಯ ಅಧಿಕಾರಿ, ಬೆಳಗಾಂ ಮಹಾನಗರ ಪಾಲಿಕೆ, ಬೆಳಗಾಂ, ಹುದ್ದೆಗೆ ವರ್ಗಾವಣೆ ಆದೇಶದಲ್ಲಿ | ಇವರ ವರ್ಗಾವಣೆ ಆದೇಶವನ್ನು ಮಾರ್ಪಡಿಸಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಬೆಳಗಾಂ ಹುದ್ದೆಗೆ ಶ್ರೀ ಕೆ. ಪ್ರಭುದೇವ್ ರವರ ಸ್ಥಾನದಲ್ಲಿ |
| 2. | ಕೆ. ಪ್ರಭುದೇವ್, ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಬೆಳಗಾಂ | ಕಂದಾಯ ಅಧಿಕಾರಿ, ಬೆಳಗಾಂ ಮಹಾನಗರ ಪಾಲಿಕೆ, ಬೆಳಗಾಂ- ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ. |
| 3. | ಶ್ರೀ. ಎ. ಚಂದ್ರಶೇಖರಪ್ಪ, ಉಪವಿಭಾಗಾಧಿಕಾರಿ, ಮಡಿಕೇರಿ ಉಪವಿಭಾಗ, ಮಡಿಕೇರಿ, ಹುದ್ದೆಗೆ ವರ್ಗಾವಣೆ ಆದೇಶದಲ್ಲಿ. | ಇವರ ವರ್ಗಾವಣೆ ಆದೇಶವನ್ನು ಮಾರ್ಪಡಿಸಿ, ಸಹಾಯಕ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು-ಖಾಲಿ ಹುದ್ದೆಗೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು. ಪಿ. ಪ್ರಭು**
ಪಿ.ಆರ್. 1182 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 271 ಸೇಅಸೆ 2003 ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್, 2003**

ಶ್ರೀ ಬುಲ್ಲಾ ಸುಬ್ಬಾರಾವ್ ಐ.ಎ.ಎಸ್. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು, ಇವರಿಗೆ ದಿನಾಂಕ: 13.10.2003 ರಿಂದ 25.10.2003 ರವರೆವಿಗೆ (ಉದಿಸೇ) ಒಟ್ಟು 13 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ. ಹಾಗೂ ರಜೆಯ ಮೊದಲು ದಿನಾಂಕ: 11.10.2003, 12.10.2003 ಮತ್ತು ರಜೆಯ ಕೊನೆಯಲ್ಲಿ ದಿನಾಂಕ: 26.10.2003 ಗಳಂದು ಬರುವ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲೂ ಸಹ ಅನುಮತಿ ನೀಡಲಾಗಿದೆ.

ಶ್ರೀ ಬುಲ್ಲಾ ಸುಬ್ಬಾರಾವ್, ಐ.ಎ.ಎಸ್, ರವರ ರಜಾ ಅವಧಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು. ಇವರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ವಸತಿ ಇಲಾಖೆ, ಬೆಂಗಳೂರು, ಹುದ್ದೆಯ ಪ್ರಭಾರದಲ್ಲಿಡಲಾಗಿದೆ.

ಶ್ರೀ ಬುಲ್ಲಾ ಸುಬ್ಬಾರಾವ್, ಐಎಎಸ್, ರವರು ರಜೆಯ ಮೇಲೆ ಹೋಗಿರದಿದ್ದರೆ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಬೆಂಗಳೂರು ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಮೇಲ್ಕಂಡ ರಜೆ ಅವಧಿಯಲ್ಲಿ ಶ್ರೀ ಬುಲ್ಲಾ ಸುಬ್ಬಾರಾವ್, ಐ.ಎ.ಎಸ್ ರವರು ಹಾಗೂ ಅವರ ಪತ್ನಿ ಶ್ರೀಮತಿ ರುಕ್ಮಿಣಿರಾವ್‌ರವರು 2002-2005ರ ಬ್ಲಾಕ್ ಅವಧಿಯಲ್ಲಿ ಶ್ರೀನಗರಕ್ಕೆ ಹೋಗಿಬರಲು ಕೇಂದ್ರ ನಿಯಮದಡಿ ರಜಾ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಮತ್ತು ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90 ರಷ್ಟು ಹಣವನ್ನು ಅಂತಿಮ ಪ್ರಯಾಣ ಭತ್ಯೆಯ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೊಳಪಟ್ಟು ಮುಂಗಡ ಪ್ರಯಾಣ ಭತ್ಯೆಯನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ.

ಈ ಹಿಂದೆ ಹೊರಡಿಸಲಾಗಿದ್ದ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 271 ಸೆಅಸೆ 2003, ದಿನಾಂಕ: 26.8.2003 ಅನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಿ. ಕುಮಾರಸ್ವಾಮಿ**

ಪಿ.ಆರ್. 1183 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-1).

## ಅಧಿಸೂಚನೆ

**ಸಂಖ್ಯೆ: ಸಿಆಸುಇ 97 ಸೇಲೋಯು 2002 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಲೋಕಾಯುಕ್ತರ ಸಾರ್ವಜನಿಕ ಸಂಪರ್ಕಾಧಿಕಾರಿ ಮತ್ತು ವಿಜಿಲೆನ್ಸ್ ಅಧಿಕಾರಿಯಾಗಿ (ವೇತನ ಶ್ರೇಣಿ 5575-10620) ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಸೈಯದ್ ರಿಯಾಜತುಲ್ಲಾ ಇವರಿಗೆ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಸೇಲೋಯು 2002, ದಿನಾಂಕ: 17.7.2003 ರಲ್ಲಿ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿನ ಒಂದು ಡಿವೈಎಸ್‌ಪಿ ಹುದ್ದೆ (ವೇತನ ಶ್ರೇಣಿ 7400-13120)ಯನ್ನು ಸಾರ್ವಜನಿಕ ಸಂಪರ್ಕಾಧಿಕಾರಿ ಎಂದು ಪದನಾಮೀಕರಿಸಿದ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್. 1184 ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಿಆಸುಇ (ಸೇವಾ ನಿಯಮಗಳು).

## ಅಧಿಸೂಚನೆ

**ಸಂಖ್ಯೆ: ಸಿಆಸುಇ 301 ಸಅಸೇ 2003 ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

ಅಧಿಸೂಚನೆ ಸಂಖ್ಯೆ: ಸಿಆಸುಇ 265 ಸಅಸೇ 2002, ದಿನಾಂಕ: 4.09.2003ರ ಅನ್ವಯ, ಶ್ರೀ ಎ. ಎನ್. ಶ್ರೀಧರ ಗ್ರಾಮೀಣಾಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ-ಇವರಿಗೆ, ಉಪಕಾರ್ಯದರ್ಶಿ ಹುದ್ದೆಯಿಂದ ಸಹ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ, ಆರ್ಥಿಕ ಇಲಾಖೆಯ ಸಂಗ್ರಹಣಾ ಕೋಶಕ್ಕೆ ನೇಮಿಸಿರುವುದನ್ನು ಭಾಗಶಃ ಮಾರ್ಪಡಿಸಿ, ಶ್ರೀ ಎ. ಎನ್. ಶ್ರೀಧರ್- ಇವರನ್ನು ಸಹ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿದ ನಂತರವೂ ಸಹ ಮಾನ್ಯ ಗ್ರಾಮೀಣಾಭಿವೃದ್ಧಿ ಸಚಿವರ ಆಪ್ತ ಶಾಖೆಯಲ್ಲಿನ ಗ್ರೂಪ್-ಎ ವೃಂದದ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 1185 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2).

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ನಅಇ 126 ನಯೋಸೇ 2003 ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

ಶ್ರೀ ಪಿ. ಎಸ್. ಮುದ್ದಪ್ಪ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ನಗರ ಯೋಜನಾ ಕೇಂದ್ರ ಕಛೇರಿ, ಬೆಂಗಳೂರು ಇವರ ದಿನಾಂಕ: 19.4.2003 ರಿಂದ 6.8.2003ರ ವರೆಗೆ ನೇಮಕಾತಿಗಾಗಿ ಕಾಯ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 1186 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 135 ಆಸೇವ 2003 ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2003**

ಉಪ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಶ್ರೀ ಕೆ. ಆರ್. ನಿರಂಜನ್ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಗರಾಭಿವೃದ್ಧಿ ಇಲಾಖೆಯಿಂದ ಹಿಂದಕ್ಕೆ ಪಡೆದು, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಮೈಸೂರು-ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 1187 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

### ಅಧಿಸೂಚನೆ

**ಸಂಖ್ಯೆ: ಸಿಆಸುಇ 125 ಆಸೇವ 2003 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 91 ಆಸೇವ 2003 ದಿನಾಂಕ: 27.8.2003 ರನ್ವಯ ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಗದಗ್, ಹುದ್ದೆಗೆ ವರ್ಗಾವಣೆ ಆದೇಶದಲ್ಲಿರುವ ಶ್ರೀ ಸಿ. ಹೆಚ್. ಪ್ರಭುದೇವ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಇವರ ವರ್ಗಾವಣೆಯನ್ನು ಮಾರ್ಪಡಿಸಿ ಹಾಗೂ ಅವರ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಹಿಂದಕ್ಕೆ ಪಡೆದು, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇಂಧನ ರಾಜ್ಯ ಸಚಿವರ ಆಪ್ತಕಾರ್ಯದರ್ಶಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 1188 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

### ಅಧಿಸೂಚನೆ

**ಸಂಖ್ಯೆ: ಸಿಆಸುಇ 40 ಸೇಉನ್ಯಾ 2003 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: ಜಿಒಬಿ (1) (1) 2003 ದಿನಾಂಕ: 5.9.2003 ರ ಅನ್ವಯ ಈ ಕೆಳಕಂಡ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಾನೂನು ಇಲಾಖೆಯ ವಶಕ್ಕೆ ನೀಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ಈಗ ಕೆಲಸ ಮಾಡುತ್ತಿರುವ ಜಾಗ | ವರ್ಗಾಯಿಸಿರುವ ಜಾಗ |
|---|---|---|
| 1. | ಶ್ರೀ ಆರ್. ಹೆಚ್. ರೆಡ್ಡಿ ಪ್ರಿಸೈಡಿಂಗ್ ಅಧಿಕಾರಿ, ಕಾರ್ಮಿಕ ನ್ಯಾಯಾಲಯ, ಬೆಂಗಳೂರು. | ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಗದಗ್, ಶ್ರೀ ಆರ್. ಬಿ. ಬೂದಿಹಾಳ್, ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ. |
| 2. | ಶ್ರೀ ಹೆಚ್. ವಿ. ರಾಮಚಂದ್ರರಾವ್ ಪ್ರಿಸೈಡಿಂಗ್ ಅಧಿಕಾರಿ, ಕಾರ್ಮಿಕ ನ್ಯಾಯಾಲಯ, ಮಂಗಳೂರು | ಪ್ರಿಸೈಡಿಂಗ್ ಅಧಿಕಾರಿ, ಕಾರ್ಮಿಕ ನ್ಯಾಯಾಲಯ, ಬೆಂಗಳೂರು, ಶ್ರೀ ಆರ್. ಹೆಚ್. ರೆಡ್ಡಿ, ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ. |

2ನೇ ಅಪರ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಂಗಳೂರು ಇಲ್ಲಿನ ಪ್ರಿಸೈಡಿಂಗ್ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪ್ರಿಸೈಡಿಂಗ್ ಅಧಿಕಾರಿ, ಕಾರ್ಮಿಕ ನ್ಯಾಯಾಲಯ, ಮಂಗಳೂರು ಈ ಹುದ್ದೆಯ ಸಮವರ್ತಿ ಪ್ರಭಾರದಲ್ಲಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1189 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಇಡಿ 106 ಡಿಸಿಇ 2003 ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2003**

ಪ್ರೊ: ಎಂ. ಬಸವರಾಜಯ್ಯ, ಪ್ರಾಚಾರ್ಯರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ ಇವರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಬ್ಬಿ ಇಲ್ಲಿಗೆ ಪ್ರೊ:ಎಂ. ಜಿ. ರಾಮಣ್ಣ ಇವರ ವಯೋ ನಿವೃತ್ತಿಯಿಂದ ತೆರವಾದ ಖಾಲಿ ಹುದ್ದೆಯಲ್ಲಿ ನೇಮಿಸಿ ಸ್ಥಳ ನಿಯುಕ್ತಿ ಮಾಡಲಾಗಿದೆ.

ಸದರಿಯವರು ಯಾವುದೇ ವರ್ಗಾವಣೆ ಭತ್ಯೆ ಮತ್ತು ಇತರೆ ಯಾವುದೇ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 1190 ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

**ಸಮಾಜ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಕಇ 199 ಬಿಇಟಿ 2003 ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2003**

ಶ್ರೀ ಕೆ. ವಿ. ರಾಮಚಂದ್ರ ಉಪನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಇವರನ್ನು ಅಧಿಸೂಚನೆ ಸಂಖ್ಯೆ: ಸಕಇ 265 ಪಕಸೆ 2002, ದಿನಾಂಕ: 18.11.2002 ರನ್ವಯ ದೇವರಾಜ ಅರಸ್ ಸಂಶೋಧನಾ ಸಂಸ್ಥೆ, ಬೆಂಗಳೂರು ಇದರಲ್ಲಿ ಖಾಲಿ ಇದ್ದ ಉಪನಿರ್ದೇಶಕರ ಹುದ್ದೆಗೆ ವರ್ಗಾವಣೆ ಮಾಡಿದ್ದು, ಶ್ರೀಯುತರು ಕೌಟುಂಬಿಕ ಮತ್ತು ವೈದ್ಯಕೀಯ ಕಾರಣಗಳಿಂದ ಸದರಿ ಹುದ್ದೆಯ ಕರ್ತವ್ಯವನ್ನು ದಿನಾಂಕ: 17.2.2003 ರಂದು ವಹಿಸಿಕೊಂಡಿರುವುದರಿಂದ ದಿನಾಂಕ: 18.11.2002 ರಿಂದ 16.2.2003ರವರೆಗಿನ ಅವಧಿಯನ್ನು ಗಳಿಕೆರಜೆ ಎಂದು ಪರಿಗಣಿಸಿದೆ ಹಾಗೂ, ದಿನಾಂಕ:28.5.2002 ರಿಂದ 17.11.2002 ರವರೆಗೆ ನೇಮಕಾತಿಗಾಗಿ ಕಾಯ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8(15)(ಎಫ್) ಅನ್ವಯ ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮರುಳಸಿದ್ಧಯ್ಯ**

ಪಿ.ಆರ್. 1191

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

**HIGH COURT OF KARNATAKA, BANGALORE,**

**NOTIFICATION**

**No:HCE: 974/2001 Dated: 24th September 2003.**

Smt. B. R. Shanthamma, Court Officer of this office is permitted to retire from service, voluntarily, with effect from the afternoon of 30.09.2003, under Rule 285 (1) (a) of KCSRs and she will be relieved of her duties in this office on the afternoon of 30.09.2003.

By Order of the hon'ble chief Justice,

PR- 1192

**R. B. Budihal**

Registrar (Judicial).

**ಶಿಕ್ಷಣ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ: ಇಡಿ 110 ಡಿಸಿಇ 2003 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಸಂಖ್ಯೆ: ಇಡಿ 110 ಡಿಸಿಇ 2003, ದಿನಾಂಕ: 3.6.2003ರ ಅಧಿಸೂಚನೆಯಲ್ಲಿ ಗ್ರೇಡ್-1 ಪ್ರಾಂಶುಪಾಲರ ಕ್ರಮ ಸಂಖ್ಯೆ:1,2,3,4 ಹಾಗೂ ಗ್ರೇಡ್-2 ಪ್ರಾಂಶುಪಾಲರ ಕ್ರಮ ಸಂಖ್ಯೆ:2ರ ವರ್ಗಾವಣೆಯು ಕೋರಿಕೆ ವರ್ಗಾವಣೆಯಾಗಿದ್ದು, ಅವರುಗಳು ವರ್ಗಾವಣೆ ಭತ್ಯೆ ಹಾಗೂ ಸೇರುವ ಕಾಲ (Joining Period) ಉಪಯೋಗ ಪಡೆಯಲು ಅರ್ಹರಾಗಿರುವುದಿಲ್ಲವೆಂದು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 1193

ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ನಅಇ 62 ನಯೋಸೇ 2003 ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2003**

ಅಧಿಸೂಚನೆ ಸಂಖ್ಯೆ: ನಅಇ 62 ನಯೋಸೇ 2003 ದಿನಾಂಕ: 31.7.2003ರ ಎರಡನೆ ಪಂಕ್ತಿಯಲ್ಲಿ "ದಿನಾಂಕ 23.3.2003 ರಿಂದ ದಿನಾಂಕ: 24.4.2003 ರವರೆಗೆ" ಎಂಬುದರ ಬದಲಾಗಿ "ದಿನಾಂಕ: 23.3.2003 ರಿಂದ ದಿನಾಂಕ: 27.4.2003 ರವರೆಗೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 1194

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**HIGH COURT OF KARNATAKA, BANGALORE,**

**NOTIFICATION**

**No. RSB: 183/2003 Dated: 22nd September 2003.**

In exercise of the Powers conferred by Section 407 of the Code of Criminal Procedure, 1973, the High Court hereby transfers the cases pertaining to Prevention of Corruption Act, 1988 (Central Act 49 of 1988) pending on the file of the III Addl. District and Sessions Judge, Mysore to the file of the Prl. District and Sessions Judge, Mysore for disposal in the interest of justice.

By Order of the High Court,

PR- 1195

**N. Ananda**

Registrar General.

## HIGH COURT OF KARNATAKA, BANGALORE,
## NOTIFICATION
### No. GOB:(1) 3/2003 Dated: 26th September 2003.

The following Presiding officers of the Courts mentioned in Column No. 2 below, are concurrently appointed as the Presiding Officers of the Courts mentioned against them in Column No. 3, with immediate effect and until further orders.

| Sl. No. | Designation of the Presiding Officer | Name of the Court to which concurrently appointed |
|---|---|---|
| 01. | I Addl. Civil Judge (Jr.Dn.) and JMFC, Bellary. | Prl. Civil Judge (Jr.Dn.) and JMFC., Bellary |
| 02. | Civil Judge (Jr.Dn.) and JMFC., Bagepalli. | Civil Judge (Jr.Dn.) and JMFC., Gudibande. |

By Order of the High Court,
**N. Ananda**
Registrar General.

PR- 1196

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಕೃತೋಇ 171 ಕೃಪವ 2003 ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 91 ಆಸೇವ 2003 ದಿನಾಂಕ 27.8.2003 ರಲ್ಲಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ವಶಕ್ಕೆ ನೀಡಿರುವ ಡಾ: ಕೆ. ಎನ್. ಚಂದ್ರಶೇಖರ್ (ನೇಮಕಾತಿ ನಿರೀಕ್ಷಣೆಯಲ್ಲಿ) ಕರ್ನಾಟಕ ಆಡಳಿತ ಸೇವೆಯ (ಹಿರಿಯ ಶ್ರೇಣಿ) ಅಧಿಕಾರಿ ಇವರನ್ನು ಕವಾಡ್ ಸೊಸೈಟಿ, ಬೆಂಗಳೂರು ಇಲ್ಲಿ ಖಾಲಿಯಿರುವ ಆಡಳಿತಾಧಿಕಾರಿಯ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರುಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 1198

## ಸಹಕಾರ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಸಇ 51 ಮಾಇಸೇ 2003 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್, 2003

ಕೃಷಿ ಮಾರಾಟ ಇಲಾಖೆಯ ಈ ಕೆಳಕಂಡ ಸಹಾಯಕ ನಿರ್ದೇಶಕರು (ವೇತನ ಶ್ರೇಣಿ ರೂ. 6000-11200) ಗಳನ್ನು, ವೃಂದ ಮತ್ತು ನೇಮಕಾತಿ ನಿಯಮಗಳನ್ನು ಹೊರಡಿಸಿದ ನಂತರ ಜ್ಯೇಷ್ಠತೆಯನ್ನು ಪುನರ್‌ವಿಮರ್ಶಿಸುವ ಹಾಗೂ ಅರ್ಜಿ ಸಂಖ್ಯೆ: 6813/2001 ರಲ್ಲಿ ಮತ್ತು ಇತರ ಪ್ರಕರಣಗಳಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಬಹುದಾದ ತೀರ್ಪಿನನುಸಾರ ಪುನರ್ ವಿಮರ್ಶಿಸುವ ಷರತ್ತಿಗೊಳಪಟ್ಟು, ತಕ್ಷಣದಿಂದ ಅನ್ವಯಿಸುವಂತೆ ಉಪ ನಿರ್ದೇಶಕರ (ವೇತನ ಶ್ರೇಣಿ ರೂ. 9580-14200) ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ಪದೋನ್ನತಿ ನೀಡಿ ನೇಮಿಸಲಾದ ಹುದ್ದೆ ಮತ್ತು ಸ್ಥಳ |
|---|---|---|
| 1. | ಶ್ರೀಮತಿ ಬಿ. ಎನ್. ಪದ್ಮ, ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು. | ಉಪ ನಿರ್ದೇಶಕರು (ವೆ ಮತ್ತು ಪೆ), ಕೃಷಿ ಮಾರಾಟ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು. |
| 2. | ಶ್ರೀ ಎಂ. ಹುಸೇನಪ್ಪ ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೀದರ್. | ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬಳ್ಳಾರಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಎಸ್. ಜಾಪಾಲಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1199

## ನಗರಾಭಿವೃದ್ಧಿ ಸಚಿವಾಲಯ
## ಅಧಿಸೂಚನೆ
### ಸಂ: ನಅಇ 347 ಬೆಮಪ್ರಾ 2003 ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003

ದಿನಾಂಕ: 27.8.2003ರ ಸಂಖ್ಯೆ: ಸಿಆಸುಇ 91 ಆಸೇವ 2003ರ ಅಧಿಸೂಚನೆಯಲ್ಲಿ ಬೆಳಗಾವಿ ನಗರಾಭಿವೃದ್ಧಿ ಕೋಶಕ್ಕೆ ಯೋಜನಾ ನಿರ್ದೇಶಕರ ಹುದ್ದೆಗೆ ವರ್ಗಾಯಿಸಿರುವ ಶ್ರೀ ಮೇಘಣ್ಣವರ್ ಕೆಎಎಸ್ (ಹಿರಿಯ ಶ್ರೇಣಿ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಹೆಚ್ಚಿನ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶ್ರೀಧರಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1200

**ಕಾನೂನು ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಲಾ 175 ಪಿಪಿಇ 2003 ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್, 2003**

ಶ್ರೀ ಆರ್. ಎ. ಬಾರವಲಿ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ. ಜೆ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯದ ಸಿಂದಗಿ ರವರನ್ನು ಸಹಾಯಕ ಸರ್ಕಾರಿ ಅಭಿಯೋಜಕರು ಪ್ರಧಾನ ಸಿ.ಜೆ(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಸಿಂದಗಿ ಹುದ್ದೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ಶ್ರೀಧರ್**

ಪಿ.ಆರ್. 1201 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 322 ಸೆಅಸೆ 2003 ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಶ್ರೀ ಅರವಿಂದ ಶ್ರೀವಾಸ್ತವ, ಐ.ಎ.ಎಸ್, ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರಿಗೆ ದಿನಾಂಕ: 3.10.2003 ರಿಂದ 10.10.2003 ರವರೆವಿಗೆ (ಉದಿಸೇ) ಒಟ್ಟು 8 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ. ಹಾಗೂ ರಜೆಯ ಮೊದಲು ದಿನಾಂಕ: 2.10.2003 ಮತ್ತು ರಜೆಯ ಕೊನೆಯಲ್ಲಿ ದಿನಾಂಕ: 11.10.2003 ಹಾಗೂ 12.10.2003ಗಳಂದು ಬರುವ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲೂ ಸಹ ಅನುಮತಿ ನೀಡಲಾಗಿದೆ.

ಶ್ರೀ ಅರವಿಂದ ಶ್ರೀವಾಸ್ತವ ಐ.ಎ.ಎಸ್, ರವರ ರಜಾ ಅವಧಿಯಲ್ಲಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ. ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರನ್ನು ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು, ಹುದ್ದೆಯ ಸಮವರ್ತಿತ ಪ್ರಭಾರದಲ್ಲಿಡಲಾಗಿದೆ.

ಶ್ರೀ ಅರವಿಂದ ಶ್ರೀವಾಸ್ತವ ಐ.ಎ.ಎಸ್., ರವರು ರಜೆಯ ಮೇಲೆ ಹೋಗಿರದಿದ್ದರೆ, ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಮೇಲ್ಕಂಡ ರಜೆ, ಅವಧಿಯಲ್ಲಿ ಶ್ರೀ ಅರವಿಂದ ಶ್ರೀವಾಸ್ತವ, ಐ.ಎ.ಎಸ್, ರವರು ಲಕ್ನೋಗೆ ಹೋಗಿ ಬರಲು ರಜಾ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ. ಈ ರಜಾ ಪ್ರಯಾಣ ರಿಯಾಯಿತಿಯನ್ನು 2002-2005ನೇ ಬ್ಲಾಕ್ ಅವಧಿಯಲ್ಲಿ ಕೇಂದ್ರ ನಿಯಮದಡಿ ಮಂಜೂರಾತಿ ನೀಡಲಾಗಿದೆ. ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90 ರಷ್ಟು ಹಣವನ್ನು ಅಂತಿಮ ಪ್ರಯಾಣ ಭತ್ಯೆಯ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೊಳಪಟ್ಟು ಮುಂಗಡ ಪ್ರಯಾಣ ಭತ್ಯೆಯನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಿ. ಕುಮಾರಸ್ವಾಮಿ**

ಪಿ.ಆರ್. 1202 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 314 ಸೆಅಸೆ 2003 ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಶ್ರೀ ಎಸ್. ಬಿ. ದ್ಯಾಬೇರಿ, ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗರವರು ದಿನಾಂಕ: 1.10.2003 ರಿಂದ 31.10.2003 ರವರೆವಿಗೆ ಪರಿವರ್ತಿತ ರಜೆಯ ಮೇಲೆ ತೆರಳುತ್ತಿರುವುದರಿಂದ, ಸದರಿ ರಜೆ ಅವಧಿಯಲ್ಲಿ ಜಿಲ್ಲಾಧಿಕಾರಿ, ಗದಗ ಜಿಲ್ಲೆ, ಗದಗ ರವರನ್ನು ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಿ. ಕುಮಾರಸ್ವಾಮಿ**

ಪಿ.ಆರ್. 1203 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 71 ಸೇಇಮು 2003 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಅಧಿಸೂಚನೆ ಸಂಖ್ಯೆ: ಸಿಆಸುಇ 162 ಸೇಇಮು 2002, ದಿನಾಂಕ: 19.11.2002 ರನ್ವಯ ದಿನಾಂಕ: 31.7.2003 ರಂದು 58 ವರ್ಷಗಳ ವಯೋಮಿತಿ ತಲುಪಿ ನಿವೃತ್ತಿ ಹೊಂದಿರುವ ಶ್ರೀ ಜಿ.ಸಿ.ತಲ್ಲೂರ (ಪ್ರಧಾನ ಇಂಜಿನಿಯರ್), ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬೆಂಗಳೂರು, ಇವರಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 15 ಎಸ್‌ಆರ್‌ಎಸ್ 97 ದಿನಾಂಕ: 20.9.1997 ರನ್ವಯ ನಿವೃತ್ತಿ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯನ್ನು 240 ದಿನಗಳ ಗರಿಷ್ಠ ಮಿತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮ 118-ಎ (1)ರಡಿ ಹಾಗೂ ಉಪನಿಯಮ (2)ರ ವ್ಯಾಪ್ತಿಗೊಳಪಟ್ಟು ನಗದೀಕರಣಗೊಳಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್. 1204 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).